# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1364**

ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವವರು : ಮಾನ್ಯ ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು

ಉತ್ತರಿಸಬೇಕಾದ ದಿನಾಂಕ : 16.03.2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್-19 ನಿಂದಾಗಿ ರಾಜ್ಯಾದ್ಯಂತ ಸಣ್ಣ ಕೈಗಾರಿಕೆಗಳು ಕುಸಿದಿದ್ದು, ಇದನ್ನೇ ನಂಬಿರುವ ಸಣ್ಣ ಉದ್ದಿಮೆದಾರರು ತೀವ್ರ ಆರ್ಥಿಕ ಸಂಕಷ್ಟದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ ಇಂತಹ ಸಂಕಷ್ಟದಲ್ಲಿರುವ ಸಣ್ಣ ಉದ್ದಿಮೆದಾರರ ಆರ್ಥಿಕ ಚೈತನ್ಯತೆ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕೊರೋನದಿಂದ ಸಂಕಷ್ಟದಲ್ಲಿರುವ ಸಣ್ಣ ಕೈಗಾರಿಕೆಗಳಿಗೆ ಸರ್ಕಾರದಿಂದ ಈ ಕೆಳಗಿನ ಯೋಜನೆಗಳನ್ನು ರೂಪಿಸಲಾಗಿರುತ್ತದೆ:<br><br>1. ಇಂಧನ ಇಲಾಖೆಯು ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳ 2020 ರ ಏಪ್ರಿಲ್ ಮತ್ತು ಮೇ ತಿಂಗಳುಗಳ ಬೇಡಿಕೆ ಶುಲ್ಕ ಮತ್ತು ಸ್ಥಿರ ಶುಲ್ಕವನ್ನು ಮನ್ನಾ ಮಾಡಿರುತ್ತದೆ.<br><br>2. ಇಂಧನ ಇಲಾಖೆಯು ವಿದ್ಯುತ್ ಬಿಲ್ಲನ್ನು ಪ್ರಾಮಾಣಿಕವಾಗಿ ನಿಗದಿತ ಅವಧಿಯೊಳಗೆ ಪಾವತಿಸುವ ಕೈಗಾರಿಕೆಗಳಿಗೆ ರಿಯಾಯಿತಿಯನ್ನು ನೀಡಿರುತ್ತದೆ. ಹೆಚ್‌ಟಿ ಗರಿಷ್ಟ ಮಿತಿ ರೂ.1.00 ಲಕ್ಷ, ಎಲ್‌ಟಿ ಗರಿಷ್ಟ ಮಿತಿ ರೂ.10,000/-<br><br>• 1 ರಿಂದ 5 ದಿನದೊಳಗೆ ಪಾವತಿಸಿದಲ್ಲಿ — ಶೇ 1% ರಿಯಾಯಿತಿ<br>• 6 ರಿಂದ 15 ದಿನದೊಳಗೆ ಪಾವತಿಸಿದಲ್ಲಿ — ಶೇ 0.5% ರಿಯಾಯಿತಿ<br>• 15 ರಿಂದ 30 ದಿನದೊಳಗೆ ಪಾವತಿಸಿದಲ್ಲಿ — ಯಾವುದೇ ರಿಯಾಯಿತಿ ಇರುವುದಿಲ್ಲ<br><br>3. ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಉದ್ಯಮಶೀಲರು ತಮಗೆ ಹಂಚಿಕೆಯಾದ ನಿವೇಶನಗಳ ಕಂತು 2020 ರ ಮಾರ್ಚ್, ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ಪಾವತಿಸದಿದ್ದಲ್ಲಿ ಆ ಪಾವತಿಯನ್ನು ಕ್ರಮವಾಗಿ 3 ತಿಂಗಳು ಮುಂದೂಡಲಾಗಿದೆ ಮತ್ತು ಈ ಮೊತ್ತಕ್ಕೆ ಯಾವುದೇ ಬಡ್ಡಿಯನ್ನು ವಿಧಿಸುವುದಿಲ್ಲ. |

| | | |
|---|---|---|
| | | 4. ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮವು ಉದ್ಯಮಶೀಲರು ತಮಗೆ ಹಂಚಿಕೆಯಾದ ನಿವೇಶನಗಳ ಕಂತು, ಮಳಿಗೆಗಳ ಬಾಡಿಗೆ ಮತ್ತು ನೀರಿನ ಶುಲ್ಕಗಳ 2020 ರ ಏಪ್ರಿಲ್,ಮೇ ಮತ್ತು ಜೂನ್ ತಿಂಗಳುಗಳ ಕಂತನ್ನು ಈ ಕೆಳಗಿನಂತೆ ಪಾವತಿಸಲು ಅವಕಾಶ ಕಲ್ಪಿಸಲಾಗಿದೆ. ಇದಕ್ಕೆ ಯಾವುದೇ ಬಡ್ಡಿಯನ್ನು ವಿಧಿಸಲಾಗುವುದಿಲ್ಲ:<br><br>ಏಪ್ರಿಲ್ 2020 ತಿಂಗಳ ಕಂತು — ಜೂನ್ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು<br>ಮೇ 2020 ತಿಂಗಳ ಕಂತು — ಜುಲೈ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು<br>ಜೂನ್ 2020 ತಿಂಗಳ ಕಂತು — ಆಗಸ್ಟ್ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು |
| ಇ) | ಇಂತಹ ಉದ್ದಿಮೆದಾರರಿಗೆ ಸಾಲ ಸೌಲಭ್ಯ ಮತ್ತು ಸಾಲ ಮರುಪಾವತಿ ವಿನಾಯಿತಿ ಕುರಿತ ಯೋಜನೆಗಳು ಸರ್ಕಾರದ ಮುಂದಿದೆಯೇ? | ಕೇಂದ್ರ ಸರ್ಕಾರ ಘೋಷಿಸಿರುವ "ಆತ್ಮ ನಿರ್ಭರ ಭಾರತ ಅಭಿಯಾನ" ದ ಅಡಿಯಲ್ಲಿ ಅತೀ ಸಣ್ಣ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸಲು ಮತ್ತು ಉದ್ಯಮಗಳಿಗೆ ಆರ್ಥಿಕ ನೆರವು ನೀಡುವ ಯೋಜನೆಯಲ್ಲಿ ಈ ಕೆಳಗಿನ ನೆರವು ದೊರೆತಿದೆ:<br><br>ಭಾರತ ಸರ್ಕಾರವು "ಇ.ಸಿ.ಎಲ್.ಜಿ"-ಎಮರ್ಜೆನ್ಸಿ ಕ್ರೆಡಿಟ್ ಲೈನ್ ಗ್ಯಾರಂಟಿ ಯೋಜನೆಯನ್ನು ಜಾರಿಗೆ ತಂದಿದ್ದು ಇದರನ್ವಯ ಫಬ್ರವರಿ-2020 ರ ಅಂತ್ಯಕ್ಕೆ ಬ್ಯಾಂಕ್‌ಗಳಲ್ಲಿ ಬಾಕಿ ಇರುವ ಎಂ.ಎಸ್.ಎಂ.ಇ ಘಟಕಗಳ ಸಾಲದ ಮೊತ್ತಕ್ಕೆ ಶೇ.20 ರಷ್ಟು ಹೆಚ್ಚುವರಿ ಸಾಲವನ್ನು ಯಾವುದೇ ಹೆಚ್ಚುವರಿ ಖಾತರಿ ಇಲ್ಲದೇ ನೀಡುವ ಯೋಜನೆಯನ್ನು ಜಾರಿಗೆ ತಂದಿರುತ್ತದೆ.<br><br>ಕೇಂದ್ರ ಸರ್ಕಾರವು ಈ ಯೋಜನೆಯನ್ನು ಜಾರಿಗೊಳಿಸುತ್ತಿರುವುದರಿಂದ ರಾಜ್ಯ ಸರ್ಕಾರದ ಮುಂದೆ ಇಂತಹ ಉದ್ದಿಮೆಗಳಿಗೆ ಸಾಲ ಸೌಲಭ್ಯ ಮತ್ತು ಸಾಲ ಮರುಪಾವತಿ ವಿನಾಯಿತಿ ಕುರಿತು ಯಾವುದೇ ಯೋಜನೆಗಳು ಇರುವುದಿಲ್ಲ. |

Nested table within item 4:

| | |
|---|---|
| ಏಪ್ರಿಲ್ 2020 ತಿಂಗಳ ಕಂತು | ಜೂನ್ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು |
| ಮೇ 2020 ತಿಂಗಳ ಕಂತು | ಜುಲೈ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು |
| ಜೂನ್ 2020 ತಿಂಗಳ ಕಂತು | ಆಗಸ್ಟ್ 2020 ತಿಂಗಳ ಕಂತಿನ ಜೊತೆ ಪಾವತಿಸತಕ್ಕದ್ದು |

ಸಿಐ 46 ಎಸ್‌ಎಸ್‌ಐ 2021

*(ಸಿ.ಸಿ ಪಾಟೀಲ್)*

ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು
ಸಾರ್ವಜನಿಕ ಸಂಪರ್ಕ ಸಚಿವರು